


# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 12-03-2021 ಪ್ರಶ್ನೆ ಸಂಖ್ಯೆ : 936 (1141)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ (ನಾಮನಿರ್ದೇಶನ ಹೊಂದಿದವರು)

ಉತ್ತರ ನೀಡಬೇಕಾದ ದಿನಾಂಕ : 12-03-2021

ಉತ್ತರಿಸುವ ಸಚಿವರು : ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ವಿಷಯ : ನರೇಗಾ ಯೋಜನೆಯ ಗುಣಮಟ್ಟದ ಬಗ್ಗೆ

(ಅ) ರಾಮನಗರ ಜಿಲ್ಲೆ, ಮಾಗಡಿ ತಾಲ್ಲೂಕು, ಕುದೂರು ಹೋಬಳಿ, ಬಿಸ್ಕೂರು ಗ್ರಾಮ ಪಂಚಾಯತಿಯಲ್ಲಿ 2020-21ನೇ ಸಾಲಿನಲ್ಲಿ ನರೇಗಾ ಯೋಜನೆಯಡಿ ಕೈಗೊಂಡ 9 ಕಾಮಗಾರಿಗಳು ಕಳಪೆ ಮಟ್ಟದ್ದಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ತಪ್ಪಿತಸ್ಥರ ವಿರುದ್ದ ಕೈಗೊಂಡಿರುವ ಕ್ರಮಗಳೇನು ; (ಸದರಿ 9 ಕಾಮಗಾರಿಗಳ ವಿವರ ನೀಡುವುದು)

(ಆ) ಸದರಿ ಕಾಮಗಾರಿಯಲ್ಲಿ ಸುಮಾರು 2 ಕೋಟಿಯಷ್ಟು ಅವ್ಯವಹಾರ ನಡೆದಿರುವುದು ಸರ್ಕಾರ ಗಮನಿಸಿದೆಯೇ ; ಗಮನಿಸಿದ್ದಲ್ಲಿ, ಸಂಬಂಧಪಟ್ಟವರ ವಿರುದ್ದ ಕೈಗೊಂಡಿರುವ ಕ್ರಮಗಳೇನು ;

(ಇ) ಸದರಿ 9 ಕಾಮಗಾರಿಗಳ ಬಿಲ್ಲನ್ನು ತಡೆಹಿಡಿದು ಸಮಗ್ರ ವರದಿ ಸಲ್ಲಿಸುವ ನಿಟ್ಟಿನಲ್ಲಿ ಕೈಗೊಂಡಿರುವ ಕ್ರಮಗಳೇನು ;

(ಈ) ಬಿಸ್ಕೂರು ಗ್ರಾಮ ಪಂಚಾಯತಿ ಕಾರ್ಯದರ್ಶಿ, ವರ್ಗಾವಣೆಗೊಂಡು 6 ತಿಂಗಳಾದರೂ ಇದುವರೆವಿಗೂ ಬೇರೊಬ್ಬರನ್ನು ಸದರಿ ಜಾಗಕ್ಕೆ ವರ್ಗಾವಣೆ ಮಾಡದಿರುವುದಕ್ಕೆ ಕಾರಣವೇನು ;

(ಉ) ಒಂದು ವರ್ಷವಾದರೂ ಸದರಿ ಗ್ರಾಮ ಪಂಚಾಯತಿಗೆ ಇಂಟರ್‌ನೆಟ್ ಸೇವೆಯನ್ನು ಪುನರ್ ಜೋಡಿಸಲು ವಿಳಂಬವಾಗುತ್ತಿರು ವುದರಿಂದ ಕೆಲಸ ಕಾರ್ಯಗಳಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸಂಪರ್ಕವನ್ನು ಪುನರ್ ಜೋಡಿಸುವ ನಿಟ್ಟಿನಲ್ಲಿ ಕೈಗೊಂಡ ಕ್ರಮಗಳೇನು ;

(ಊ) ರಾಜ್ಯದ ಪಂಚಾಯತಿ ವ್ಯಾಪ್ತಿಗೆ ಬರುವ ಗ್ರಂಥಾಲಯಗಳ ಮೇಲ್ವಿಚಾರಕರ ಕನಿಷ್ಠ ವೇತನವನ್ನು ಜಾರಿ ಮಾಡುವುದು ಯಾವಾಗ?